




(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ○

1. ಅಂಜೂರ ಮತ್ತು ಇಪ್ಪೆಯಾಣೆ-[1]

وَالتِّيْنِ وَالزَّيْتُوْنِ ①

2. ಸೀನಾಯ್ ಪರ್ವತದಾಣೆ-

وَطُوْرِ سِيْنِيْنَ ②

3. ಮತ್ತು ಈ ಶಾಂತಿಪೂರ್ಣ ನಗರ(ಮಕ್ಕಾ) ದಾಣೆ-

وَهٰذَا الْبَلَدِ الْاَمِيْنِ ③

4. ನಾವು ಮಾನವನನ್ನು ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಿರುತ್ತೇವೆ.

لَقَدْ خَلَقْنَا الْاِنْسَانَ فِيْٓ اَحْسَنِ تَقْوِيْمٍ ④

5. ತರುವಾಯ ನಾವು ಅವನನ್ನು ಪಲ್ಲಟಗೊಳಿಸಿ, ನೀಚರಲ್ಲಿ ಅತ್ಯಂತ ನೀಚನಾಗಿ ಮಾಡಿದೆವು-

ثُمَّ رَدَدْنٰهُ اَسْفَلَ سٰفِلِيْنَ ⑤

6. ಆದರೆ, ವಿಶ್ವಾಸವಿರಿಸಿಕೊಂಡ ಮತ್ತು ಸತ್ಕರ್ಮವೆಸಗುತ್ತಿದ್ದವರ ಹೊರತು- ಅವರಿಗೆ ಎಂದೂ ಮುಗಿಯದಂತಹ ಸತ್ಫಲವಿದೆ.

اِلَّا الَّذِيْنَ اٰمَنُوْا وَعَمِلُوا الصّٰلِحٰتِ فَلَهُمْ اَجْرٌ غَيْرُ مَمْنُوْنٍ ⑥

7. (ಸಂದೇಶವಾಹಕರೇ) ಇದರ ನಂತರ ಇನ್ನಾರು ತಾನೇ ಪುರಸ್ಕಾರ ಮತ್ತು ಶಿಕ್ಷೆಯ ವಿಷಯದಲ್ಲಿ ನಿಮ್ಮನ್ನು ಸುಳ್ಳಾಗಿಸಬಲ್ಲರು?

فَمَا يُكَذِّبُكَ بَعْدُ بِالدِّيْنِ ⑦

8. ಅಲ್ಲಾಹನು ಎಲ್ಲ ಅಧಿಪತಿಗಳಿಗಿಂತ ಮಹಾ ಅಧಿಪತಿಯಲ್ಲವೇ?[2]

اَلَيْسَ اللّٰهُ بِاَحْكَمِ الْحٰكِمِيْنَ ⑧

1. ಅರ್ಥಾತ್- ಹೆಚ್ಚಿನ ಸಂಖ್ಯೆಯ ಪ್ರವಾದಿಗಳ ಜನ್ಮಸ್ಥಳವಾಗಿರುವ ಮತ್ತು ಈ ಫಲಗಳು ಹೆಚ್ಚಾಗಿ ಬೆಳೆಯುವ (ಸಿರಿಯಾ ಮತ್ತು ಫೆಲೆಸ್ತೀನ್) ಪ್ರದೇಶಗಳು.

2. ಅರ್ಥಾತ್- ಲೋಕದ ಸಣ್ಣ ಸಣ್ಣ ಆಡಳಿತಗಾರರಿಂದಲೂ ನೀವು ಬಯಸುವುದು ಮತ್ತು ನಿರೀಕ್ಷಿಸುವುದು- ಅವರು ನ್ಯಾಯಪಾಲಿಸಬೇಕು, ಅಪರಾಧಿಗಳನ್ನು ದಂಡಿಸಬೇಕು ಮತ್ತು ಸತ್ಕಾರ್ಯಗಳನ್ನು ಮಾಡುವವರಿಗೆ ಪ್ರತಿಫಲ ಮತ್ತು ಅನುಗ್ರಹಗಳನ್ನು ನೀಡಬೇಕು ಎಂದಾಗಿದೆ. ಹಾಗಿರುವಾಗ ಅಲ್ಲಾಹನಿಂದ ನೀವು ಮತ್ತೇನನ್ನು ಬಯಸುತ್ತೀರಿ? ಎಲ್ಲ ಅಧಿಪತಿಗಳಿಗಿಂತಲೂ ಮಿಗಿಲಾದ ಅಧಿಪತಿಯಾದ ಅವನು ನ್ಯಾಯಪಾಲಿಸಲಾರ ಎಂದು ನೀವು ಭಾವಿಸಿದ್ದೀರಾ? ಒಳಿತು-ಕೆಡುಕುಗಳನ್ನು ಸರಿಸಮಗೊಳಿಸುವನೆಂದು ನಿರೀಕ್ಷಿಸುತ್ತೀರಾ? ದುಷ್ಕೃತ್ಯಗಳನ್ನೆಸಗುವವರು ಮತ್ತು ಸತ್ಕಾರ್ಯಗಳನ್ನು ಮಾಡುವವರಿಬ್ಬರೂ ಮೃತಪಟ್ಟು ಮಣ್ಣಾಗಿ ಬಿಡುವರು. ಅನಂತರ ದುಷ್ಕೃತ್ಯಗಳಿಗೆ ಶಿಕ್ಷೆಯಾಗಲಿ, ಸತ್ಕರ್ಮಗಳಿಗೆ ಪ್ರತಿಫಲವಾಗಲಿ ದೊರೆಯಲಾರದೆಂದು ನೀವು ಕಲ್ಪಿಸಿಕೊಂಡಿದ್ದೀರಾ?